“ಸಿರಿಗನ್ನಡಂ ಗೆಲ್ಗೆ ಸಿರಿಗನ್ನಡಂ ಬಾಳ್ಗೆ”



ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಹಾಸನ

ಎಸ್.ಎ.ರಂಗಣ್ಣ ರಸ್ತೆ, ಹಾಸನ

### ಹಾಸನ ಜಿಲ್ಲಾ ೨೦ನೇ

# ಕನ್ನಡ ಸಾಹಿತ್ಯ ಸಮ್ಮೇಳನ




# ಸಾಹಿತ್ಯ ಸಿರಿ

## ಸ್ಮರಣ ಸಂಚಿಕೆ

“ಅಳಿಯದೀ ಕನ್ನಡಂ, ಅಳುಕದೀ ಕನ್ನಡಂ, ಉಳಿವುದೀ ಕನ್ನಡಂ”

## ಸಂಪಾದಕೀಯ ಮಂಡಳಿ



ಡಾ. ಡಿ.ಜಿ. ಕೃಷ್ಣೇಗೌಡ



ಎನ್. ಎಲ್. ಚನ್ನೇಗೌಡ



ಡಾ. ದಿನೇಶ್ ಕೆ.ಎಸ್.



ಡಾ. ಬಿಚನಹಳ್ಳಿ ಕೃಷ್ಣಪ್ಪ



ಕೆ.ಟಿ. ಜಯಶ್ರೀ



ವನಜಾ ಸುರೇಶ್

ಸಹ ಸಂಪಾದಕರು :

ಡಾ. ಜಿ.ಡಿ. ನಾರಾಯಣ್, ಬಿ.ಡಿ. ಶಂಕರೇಗೌಡ

ಎಚ್.ಕೆ. ಅಶೋಕ್, ಬಿ.ಎಚ್. ಶ್ರೀನಿವಾಸ್, ಕೆ.ಎಸ್. ಸುಂದ್ರೇಶ್

# ಕನ್ನಡ ಸಾಹಿತ್ಯಕ್ಕೆ ಎಸ್.ವಿ ರಂಗಣ್ಣ ಅವರ ಕೊಡುಗೆ.

ರೂಪಕ ಸಾಮ್ರಾಜ್ಯದ ಚಕ್ರವರ್ತಿ ಕುಮಾರವ್ಯಾಸನೆಂದು ಹಲವು ಸಲ ಓದಿದ್ದರು,ಆ ಗೌರವದ ಸಾಲನ್ನು ನೀಡಿದವರು ಎಸ್.ವಿ ರಂಗಣ್ಣನವರು ಎಂಬ ವಿಚಾರ ಬಹುಜನರಿಗೆ ತಿಳಿಯಲು ಸಾಕಷ್ಟು ಸಮಯವೇ ಬೇಕಾಗುತ್ತಿದೆ.ನಾರಾಯಣಪ್ಪನ ಶೈಲಿ ಎಂಬ ಲೇಖನದಲ್ಲಿ ಕುಮಾರವ್ಯಾಸನಿಗೆ ಈ ಗೌರವವನ್ನು ನೀಡುತ್ತಾರೆ, ಮುಂದೆ ಅದು ಗಾದೆ ಮಾತಿನಂತೆ ಲೋಕಪ್ರಸಿದ್ಧಿಯನ್ನು ಪಡೆಯುತ್ತದೆ. ಎಸ್.ವಿ ರಂಗಣ್ಣನವರು ಹಾಸನ ಜಿಲ್ಲೆಯ ಸಾಲಗಾಮೆ ಎಂಬ ಗ್ರಾಮದಲ್ಲಿ ೧೮೯೮ ಡಿಸೆಂಬರ್ ೨೪ ರಂದು ಜನಿಸಿದರು. ತಂದೆ ವೆಂಕಟಸುಬ್ಬಯ್ಯ, ತಾಯಿ ವೆಂಕಟಲಕ್ಷ್ಮಮ್ಮ.ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಪದವಿ ಮುಗಿಸಿ,ಮೈಸೂರು ವಿವಿಯಲ್ಲಿ ಎಂ.ಎ ಪದವಿಯನ್ನು ಪಡೆದರು.ಮೈಸೂರು,ತುಮಕೂರು,ಬೆಂಗಳೂರಿನ ಕಾಲೇಜುಗಳಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿ ೧೯೫೪ ರಲ್ಲಿ ನಿವೃತ್ತಿ ಹೊಂದಿದರು.

ಸಾಹಿತ್ಯ ಚರಿತ್ರೆ, ಅಲಂಕಾರ ಶಾಸ್ತ್ರ ಮತ್ತು ಸಾಹಿತ್ಯ ವಿಮರ್ಶೆಯಲ್ಲಿ ಆಳವಾದ ಜ್ಞಾನ ಹೊಂದಿದ್ದ ಎಸ್.ವಿ ರಂಗಣ್ಣನವರು ಕನ್ನಡ ಸಾಹಿತ್ಯಕ್ಕೆ ಅತ್ಯಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ. ರಂಗಭಿನ್ನಪ, ಹೊನ್ನ ಶೂಲ,ಆರು ಗ್ರೀಕ್ ನಾಟಕಗಳು(ಭಾಷಾಂತರ),ಕಾಳಿದಾಸನ ನಾಟಕಗಳ ವಿಮರ್ಶೆ,ಪಾಶ್ಚಾತ್ಯ ಗಂಭೀರ ನಾಟಕಗಳು, ಕುಮಾರ ವ್ಯಾಸನ ವಾಣಿ, ಮರುಭಿನ್ನಪ, ಕವಿ ಕಥಾಮೃತ, ನಾಟುನುಡಿ, ಹರಿಶ್ಚಂದ್ರ ಕಾವ್ಯ(ನಾಟಕ), ಉತ್ತರ ಕುಮಾರ(ನಾಟಕ),ಶೈಲಿ, ದಿ ಲೇಡಿ ಅಂಡ್ ರಿಂಗ್, ಓಲ್ಡ್ ಟೇಲ್ಸ್ ರೀ ಟೋಲ್ಡ್,ಆನ್ ದಿ ಸೆಲ್ಫ್ ಎಂಬ ಗ್ರಂಥಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ನೀಡಿದರು. ಕೆ.ವಿ ಪುಟ್ಟಪ್ಪನವರು ಪ್ರಧಾನ ಸಂಪಾದಕರಾಗಿದ್ದ,ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ ಯೋಜನೆಯ ಭಾಗವಾಗಿ ೧೯೫೦ ರಲ್ಲಿ ಮೈಸೂರು ವಿವಿ ಪ್ರಸಾರಾಂಗದಿಂದ ಪ್ರಕಟವಾದ ಪಾಶ್ಚಾತ್ಯ ಗಂಭೀರ ನಾಟಕಗಳು ಎಸ್.ವಿ ರಂಗಣ್ಣನವರ ಪ್ರಮುಖ ವಿಮರ್ಶ ಗ್ರಂಥ. ಕೆ.ವಿ ಪುಟ್ಟಪ್ಪನವರ ಮುನ್ನುಡಿಯೊಂದಿಗೆ,ಎಸ್.ವಿ ರಂಗಣ್ಣನವರ ವಿಜ್ಞಾಪನೆಯೊಂದಿಗೆ ಆರಂಭವಾಗುವ ಗ್ರಂಥ ಆರು ಭಾಗಗಳನ್ನು ಹೊಂದಿದೆ.

ಮೊದಲನೇ ಭಾಗದಲ್ಲಿ ಟ್ರ್ಯಾಜಿಡಿ,ಗಂಭೀರ ನಾಟಕಗಳ ಹುಟ್ಟು,ಈಸ್ಕಿಲಸ್,ಸಾಫೋಕೀಸ್,ಯೂರಿಪಿಡೀಸ್, ಎರಡನೇ ಅಧ್ಯಾಯದಲ್ಲಿ ನಾಟಕದ ಪತನ. ಅಂಧಕಾರಯುಗ, ಮಧ್ಯಯುಗ, ಮಧ್ಯಯುಗದ ರೂಪಕ,ಮೂರನೇ ಭಾಗದಲ್ಲಿ ಪೀಡ್ರೊ ಕಾಲ್ಡೆರಾನ್,ಥಾಮಸ್ ಕಿಡ್,ಕ್ರಿಸ್ಟೋಫರ್ ಮಾರ್ಲೋ, ಷೇಕ್ಸ್ ಪಿಯರ್ ನ ಗಂಭೀರ ನಾಟಕಗಳ ವಿವೇಚನೆ, ನಾಲ್ಕನೇ ಅಧ್ಯಾಯದಲ್ಲಿ ಕಾರ್ನೀಲ್, ರಾಸಿನ್, ಮಿಲ್ಟನ್, ಡ್ರೈಡನ್, ಆಡಿಸನ್, ಆಲ್ ಫಿಎರಿ, ಐದನೇ ಅಧ್ಯಾಯದಲ್ಲಿ ಇಬ್ಸನ್ ,ಸ್ಟ್ರಿಂಡ್ ಬರ್ಗ್,ಟಾಲ್ ಸ್ಟಾಯ್, ಚೆಖೋವ್,ಹಾಪ್ಟ್ ಮನ್, ಆರನೇ ಭಾಗದಲ್ಲಿ ಪಿರಾಂಡೆಲೊ, ಕಾಮೂ, ಬೆಕಟ್, ಬ್ರೆಕ್ಟ್ ಇವರ ಜೀವನ ಮತ್ತು ನಾಟಕಗಳ ವಿಚಾರಗಳನ್ನು ಹೇಳುವುದರ ಜೊತೆಗೆ ಕೃತಿಯುದ್ದಕ್ಕೂ ವಿಷಯಕ್ಕೆ ಪೂರಕವಾಗಿ ಕೆಲವು ಚಿತ್ರಗಳನ್ನು ಬಳಸಿದ್ದಾರೆ. ಯೂರೋಪ್ ಮತ್ತು ಅಮೇರಿಕ ದೇಶಗಳಲ್ಲಿ ಪ್ರಾಚೀನ ಕಾಲದಿಂದ ಆಧುನಿಕ ಕಾಲದವರಗೆ ರಚನೆಯಾಗಿರುವ ಹಲವು ದುರಂತ ನಾಟಕಗಳ ಮತ್ತು ನಾಟಕಗಳ ಪರಿಚಯ,ಈಸ್ಕಿಲಸ್ ,ಸಾಫೋಕ್ಲೀಸ್ ಎಂಬ ಗ್ರೀಕ್ ನಾಟಕಕಾರರಿಂದ ಪ್ರಾರಂಭವಾಗಿ ಹಲವು ನಾಟಕಕಾರರ ,ಅವರ ನಾಟಕಗಳ ವಿಮರ್ಶೆ ಈ ಕೃತಿಯಲ್ಲಿದೆ.

"ಗುಣದಲ್ಲಿಯೂ ಗಾತ್ರದಲ್ಲಿಯೂ ಒಂದು ಅಪೂರ್ವ ಪ್ರಮಾಣದ ಈ ಕೃತಿ" ಪ್ರಭುಶಂಕರ ಅವರ ಮಾತು ಮತ್ತು "ನಾಟಕ ಸಾಹಿತ್ಯವನ್ನು ಕುರಿತು ಇಷ್ಟು ವ್ಯಾಪಕವಾದ ವಿಮರ್ಶ ಗ್ರಂಥ ಕನ್ನಡದಲ್ಲಿ ಮಾತ್ರವಲ್ಲ ಬೇರೆ ಭಾರತೀಯ ಭಾಷೆಗಳಲ್ಲೂ ಅಪೂರ್ವ" ಎಂಬ ಕೆ.ವಿ ಪುಟ್ಟಪ್ಪನವರ ಮಾತು ಪಾಶ್ಚಾತ್ಯ ಗಂಭೀರ ನಾಟಕಗಳು ಕೃತಿಯ ಮಹತ್ವವನ್ನು ಸಾರಿ ಹೇಳುತ್ತವೆ. ಮುದ್ದಣನ ರಾಮಾಶ್ವಮೇಧದ ಬಗ್ಗೆ ಹೊನ್ನ ಶೂಲ ಕೃತಿಯಲ್ಲಿ ಹೇಳಿರುವ "ಸಾಮಾನ್ಯ ಚಿತ್ರಕ್ಕೆ ಸುವರ್ಣದ ಚೌಕಟ್ಟು" ಎಂಬ ಮಾತು ಎಸ್.ವಿ ರಂಗಣ್ಣನವರ ವಿಮರ್ಶ ಸಾಮರ್ಥ್ಯವನ್ನು ತಿಳಿಸುತ್ತದೆ.ಈ ಕೃತಿಯಲ್ಲಿ ಮುದ್ದಣನ ರಾಮಾಶ್ವಮೇಧದ ಬಗ್ಗೆ ಸಾಮಾನ್ಯ ಚಿತ್ರಕ್ಕೆ ಸುವರ್ಣದ ಚೌಕಟ್ಟು ಎಂಬ ವಿಮರ್ಶ ಲೇಖನದಲ್ಲಿ, ರನ್ನನ ಸಾಹಸ ಭೀಮ ವಿಜಯಂ ಕೃತಿಯ ಹಿನ್ನಲೆಯಲ್ಲಿ ಬಿ.ಎಂ.ಶ್ರೀ ಅವರ ಅಶ್ವತ್ಥಾಮನ್,ಗದಾಯುದ್ಧ ನಾಟಕಮ್ ನಾಟಕಗಳ ವಿವೇಚನೆಯನ್ನು 'ಅರೆ ವಜ್ರ ಎಂಬ ವಿಮರ್ಶ ಲೇಖನದಲ್ಲಿ, ವ್ಯಾಸನ ಮಹಾಭಾರತ, ಪಂಪನ ವಿಕ್ರಮಾರ್ಜುನ ವಿಜಯಂ,ಕುಮಾರವ್ಯಾಸನ ಕರ್ಣಾಟ ಭಾರತ ಕಥಾ ಮಂಜರಿ, ಮೂರನೇ ಮಂಗರಸನ ನೇಮಿಜಿನೇಶ ಸಾಂಗತ್ಯ,ಬ್ರಹ್ಮಣಾಂಕನ ಜಿನಭಾರತ ಕೃತಿಗಳಲ್ಲಿ ವ್ಯಕ್ತವಾಗಿರುವ ಕರ್ಣನ ಪಾತ್ರದ ಬಗ್ಗೆ ಕರ್ಣನ ಪಾತ್ರದ ತೊಡಕು ಎಂಬ ವಿಮರ್ಶ ಲೇಖನದಲ್ಲಿ, ಫೆಲಿಕ್ಸ ಲೋಪ್ ಡ ವೀಗ ಕಾರ್ಪಿಯೊ ಬಗ್ಗೆ ಕವಿ ಕೀರ್ತಿಯ ಏರಿಳಿತ: ಸೆಯಿನ್ ದೇಶದ ಲೋಪ್ ಡ ವೀಗ ಎಂಬ ವಿಮರ್ಶ ಲೇಖನದಲ್ಲಿ,ಕಾಳಿದಾಸನ ಮತ್ತು ಆತನ ಕೃತಿಗಳ ಬಗ್ಗೆ ಕವಿಕುಲಗುರು ಎಂಬ ವಿಮರ್ಶ ಲೇಖನದಲ್ಲಿ,ಪಾಶ್ಚಾತ್ಯ ಸಾಹಿತ್ಯ ಮತ್ತು ಕೃತಿಗಳ ಬಗ್ಗೆ ಪ್ರಶಂಶೆ ಸಾಕೊ ಪರೀಕ್ಷೆ ಬೇಕೊಎಂಬ ವಿಮರ್ಶ ಲೇಖನದಲ್ಲಿ ಸಾಕಷ್ಟು ವಿಚಾರಗಳನ್ನು ಚರ್ಚಿಸಿದ್ದಾರೆ.

ದಿನಾಂಕ:೧೧,೧೨,೧೩ ಡಿಸೆಂಬರ್ ೧೯೭೬ ರಂದು ಶಿವಮೊಗ್ಗದಲ್ಲಿ ನೆಡೆದ ೪೮ ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ ಪಡೆದುಕೊಂಡ ಎಸ್,ವಿ ರಂಗಣ್ಣನವರು ರಂಗಭಿನ್ನಪ ಕೃತಿಗೆ ೧೯೭೭ ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದರು. ಹೀಗೆ ಕನ್ನಡ ಸಾಹಿತ್ಯ ಪರಂಪರೆ ವಿಶಿಷ್ಟ ಕೊಡುಗೆ ನೀಡಿದ ಎಸ್.ವಿ ರಂಗಣ್ಣನವರು ದಿನಾಂಕ:17-02-1987 ರಂದು ಮರಣ ಹೊಂದಿದರು.

-ಸುಂದ್ರೇಶ್ ಕೆ.ಎಸ್
ಸಹಾಯಕ ಪ್ರಾಧ್ಯಾಪಕರು,ಕನ್ನಡ ವಿಭಾಗ,
ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು,